ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಪಿ.ಯು. ಕಾಲೇಜಿಗೆ ಅನುಮತಿ ನೀಡದೆ ತೊಂದರೆ ನೀಡುತ್ತಿರುವ ಬಗ್ಗೆ

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

887 (834) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ 2018-19 ಹಾಗೂ 2019-20ನೇ ಸಾಲಿನಲ್ಲಿ ಪಿ.ಯು ಕಾಲೇಜಿಗೆ ಅನುಮತಿ ಕೋರಿ ಬಂದಿರುವ ಅರ್ಜಿಗಳ ವಿವರ ನೀಡುವುದು; ಇಲ್ಲಿಯವರೆಗೆ ಎಷ್ಟು ಕಾಲೇಜುಗಳಿಗೆ ಪ್ರವೇಶ ಅವಕಾಶ ನೀಡಲಾಗಿದೆ; (ತಾಲ್ಲೂಕುವಾರು/ಜಿಲ್ಲಾವಾರು ವಿವರ ನೀಡುವುದು)

(ಆ) ರಾಜ್ಯದಲ್ಲಿ ಕೊರೋನಾ ಹಾವಳಿ ಹೆಚ್ಚಾಗಿರುವುದರಿಂದ ವಿದ್ಯಾರ್ಥಿಗಳು ತಮ್ಮ ಸ್ವಂತ ಊರಿನಲ್ಲಿ ಕಾಲೇಜು ಶಿಕ್ಷಣ ಮುಂದುವರೆಸಲು ಪ್ರಯತ್ನಿಸುತ್ತಿದ್ದು, ಕಾಲೇಜಿನ ಅಭಾವದಿಂದ ಈಗಾಗಲೇ ಇರುವ ಕಾಲೇಜಿನಲ್ಲಿ ನಿಗಧಿಪಡಿಸಿದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ವಿದ್ಯಾರ್ಥಿಗಳು ಪ್ರವೇಶ ಅವಕಾಶ ಪಡೆಯಲು ಪ್ರಯತ್ನಿಸುತ್ತಿದ್ದು ಇದರಿಂದ ಅನುಮತಿ ಕೋರಿ ಪ್ರಸ್ತಾವನೆ ಬಂದಿರುವ ಕಾಲೇಜುಗಳಿಗೆ ಅನುಮತಿ ನೀಡಿದರೆ ಈ ಸಮಯದಲ್ಲಿ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತಿತ್ತು ಎಂಬ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) ಹಾಗಿದ್ದಲ್ಲಿ, ಅನುಮತಿ ಕೋರಿ ಬಂದಿರುವ ಕಾಲೇಜಿಗೆ ಅನುಮತಿ ನೀಡದೇ ವಿಳಂಬ ನೀತಿ ಅನುಸರಿಸಿರುª ÀÅದು ನಿಜವೇ; (ವಿವರ ನೀಡುವುದು)

(ಇ) ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿನಿಂದ ಪಿ.ಯು. ಕಾಲೇಜಿಗೆ ಪ್ರವೇಶ ಕೋರಿ ಬಂದಿರುವ ಅರ್ಜಿಗೆ ಪಿ.ಯು. ಬೋರ್ಡ್ ರವರು ಸ್ಪಂದಿಸದಿರುವುದಕ್ಕೆ ಕಾರಣವೇನು;

(ಈ) ಸರ್ಕಾರ ವಿದ್ಯಾರ್ಥಿಗಳಿಗೆ ಸ್ಪಂದಿಸುವ ದೃಷ್ಟಿಯಿಂದ ವಿವಿಧ ತಾಲ್ಲೂಕುಗಳಲ್ಲಿ ಪಿ.ಯು. ಕಾಲೇಜು ಸ್ಥಾಪನೆಗೆ ಅನುಮತಿ ನೀಡಲು ಈಗಾಗಲೇ ಆದೇಶ ಮಾಡಿದ್ದು, ಪಿ.ಯು. ಬೋರ್ಡ್ ರವರು ಅನಾವಶ್ಯಕವಾಗಿ ಅನುಮತಿ ನೀಡದೇ ಸತಾಯಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಕೂಡಲೇ ಸಂಬಂಧಿಸಿದವರಿಗೆ ಕಾಲೇಜು ಪ್ರಾರಂಭಿಸಲು ಅನುಮತಿ ನೀಡಲಾಗುವುದೇ? (ವಿವರ ನೀಡುವುದು)